# ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 591
2. ಸದಸ್ಯರ ಹೆಸರು : ಶ್ರೀ ಬಸವರಾಜ ಪಾಟೀಲ್ ಇಟಗಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)
3. ಉತ್ತರಿಸುವ ದಿನಾಂಕ : 04-03-2021
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಅಬ್ಬಿಗೆರೆಹಳ್ಳಿ ಶೆಟ್ಟಿಹಳ್ಳಿ ವಾರ್ಡ್ ನಂ. 12, ದಾಸರಹಳ್ಳಿ ನಗರಸಭಾ, ಬೆಂಗಳೂರು ಇಲ್ಲಿನ ರಸ್ತೆಗಳು ಅಭಿವೃದ್ಧಿಯಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಅಬ್ಬಿಗೆರೆಹಳ್ಳಿ ಶೆಟ್ಟಿಹಳ್ಳಿ ವಾರ್ಡ್ ನಂ.12, ದಾಸರಹಳ್ಳಿ, ನಗರಸಭಾ, ಬೆಂಗಳೂರು ಇಲ್ಲಿನ ರಸ್ತೆಗಳ ಅಭಿವೃದ್ಧಿ ಕೈಗೊಳ್ಳುವ ನಿಟ್ಟಿನಲ್ಲಿ ಅಬ್ಬಿಗೆರೆ ಮುಖ್ಯರಸ್ತೆಯನ್ನು "ಸುಬ್ರತೋ ಮುಖರ್ಜಿ ರಸ್ತೆಯಿಂದ ಸಿಂಗಾಪುರ ಬಡಾವಣೆ ರಸ್ತೆಯವರೆಗೂ" ರಸ್ತೆ ಅಗಲೀಕರಣ ಮತ್ತು ಅಭಿವೃದ್ಧಿ ಮಾಡಲು ರೂ.9.50 ಕೋಟಿಗಳು ಅನುಮೋದನೆಯಾಗಿದ್ದು, ಬಿಬಿಎಂಪಿ ವತಿಯಿಂದ ಈಗಾಗಲೇ ಟೆಂಡರ್ ಕರೆಯಲಾಗಿರುತ್ತದೆ. |
| ಆ | ಸದರಿ ರಸ್ತೆಗಳು ಅಭಿವೃದ್ಧಿಯಾಗದೇ ಅಲ್ಲಿನ ಜನ ಸಾಮಾನ್ಯರಿಗೆ ಮತ್ತು ವಾಹನ ಸವಾರರಿಗೆ ಓಡಾಡಲು ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕೊಳವೆ ಜೋಡಣೆ ಕಾರ್ಯವು ಮತ್ತು ಪರೀಕ್ಷಾವಧಿ ಮುಂದುವರೆದಿದ್ದು, ಈ ಕಾರಣದಿಂದ ಸದರಿ ರಸ್ತೆಗಳನ್ನು ದುರಸ್ತಿಪಡಿಸಲು ಅಡಚಣೆಯಾಗಿದ್ದು, ಇದರಿಂದ ಸಾರ್ವಜನಿಕರಿಗೆ ತೊಂದರೆಯಾಗಿರುತ್ತದೆ. |
| ಇ | ಬಂದಿದ್ದಲ್ಲಿ, ಆ ರಸ್ತೆಗಳು ಅಭಿವೃದ್ಧಿಯಾಗದಿರುವುದಕ್ಕೆ ಕಾರಣವೇನು; (ವಿವರ ನೀಡುವುದು) | ದಾಸರಹಳ್ಳಿ ವಲಯದಲ್ಲಿ 110 ಹಳ್ಳಿಗಳ ಪೈಕಿ 05 ಹಳ್ಳಿಗಳಾದ ಅಬ್ಬಿಗೆರೆ, ಚಿಕ್ಕಸಂದ್ರ, ಮೇದರಹಳ್ಳಿ, ಶೆಟ್ಟಿಹಳ್ಳಿ & ಸಿಡೇದಹಳ್ಳಿ ಗ್ರಾಮಗಳು ಸೇರಿರುತ್ತವೆ. ಅಬ್ಬಿಗೆರೆ ಹಳ್ಳಿಯಲ್ಲಿ ಒಟ್ಟು 310 ವಾರ್ಡ್ ರಸ್ತೆಗಳಿದ್ದು, ಸದರಿ ರಸ್ತೆಗಳ ಉದ್ದವು ಸುಮಾರು 49.07 ಕಿ.ಮೀ ಗಳಾಗಿರುತ್ತದೆ. ಅಬ್ಬಿಗೆರೆ ಗ್ರಾಮದ ರಸ್ತೆಗಳನ್ನು ಬೆಂಗಳೂರು ನೀರು ಸರಬರಾಜು ಮತ್ತು ಒಳ ಚರಂಡಿ ಮಂಡಳಿಯ ವತಿಯಿಂದ ಕುಡಿಯುವ ನೀರು ಮತ್ತು ಒಳ ಚರಂಡಿ ವ್ಯವಸ್ಥೆ ಕಲ್ಪಿಸುವ ಸಲುವಾಗಿ ಎರಡು ಬದಿಗಳಲ್ಲಿ ಅಗೆದಿರುವ ಕಾರಣ ರಸ್ತೆಗಳು ಹದಗೆಟ್ಟಿರುತ್ತವೆ. ಸದರಿ ಗ್ರಾಮದ ರಸ್ತೆಗಳನ್ನು 2020-21ನೇ ಸಾಲಿನ ಬಿಬಿಎಂಪಿ ಆಯವ್ಯಯದಲ್ಲಿ ಲೆಕ್ಕ ಶೀರ್ಷಿಕೆ ಪಿ-3854 ರ ಅಡಿಯಲ್ಲಿ ದಾಸರಹಳ್ಳಿ ವಿಧಾನ ಸಭಾ ಕ್ಷೇತ್ರದ ರಸ್ತೆಗಳ ಅಭಿವೃದ್ಧಿಗೆ ಬಿಡುಗಡೆಯಾಗಿರುವ ರೂ.8.00 ಕೋಟಿಗಳ ಅನುದಾನದಲ್ಲಿ ಅಬ್ಬಿಗೆರೆ ಗ್ರಾಮದ ಸುಮಾರು 5.00 ಕಿ.ಮೀ ನಷ್ಟು ರಸ್ತೆಗಳನ್ನು ಅಭಿವೃದ್ಧಿ ಪಡಿಸಲು ಉದ್ದೇಶಿಸಲಾಗಿದೆ. |

. . .2/-

| | | |
|---|---|---|
| | | ಅನುದಾನದ ಲಭ್ಯತೆ ಅನುಗುಣವಾಗಿ ಕಾಮಗಾರಿಗಳನ್ನು ಕೈಗೆತ್ತಿಕೊಳ್ಳಲಾಗಿದ್ದು, 2020-21ನೇ ಸಾಲಿನಲ್ಲಿ ಸದರಿ ರಸ್ತೆಗಳನ್ನು ಅಭಿವೃದ್ಧಿಪಡಿಸಲು ಅಬ್ಬಿಗೆರೆ ಮುಖ್ಯರಸ್ತೆಯ ಅಗಲೀಕರಣ ಕಾಮಗಾರಿಯನ್ನು ರೂ.9.50 ಕೋಟಿಗಳ ಅಂದಾಜು ವೆಚ್ಚದಲ್ಲಿ ಕೈಗೊಳ್ಳಲು ಟೆಂಡರ್ ಕರೆಯಲಾಗಿರುತ್ತದೆ.<br><br>ಆರ್ಟೀರಿಯಲ್ ಹಾಗೂ ಸಬ್-ಆರ್ಟೀರಿಯಲ್ ರಸ್ತೆಗಳಾದ ಅಬ್ಬಿಗೆರೆ ರಸ್ತೆ, ಚಿಕ್ಕಸಂದ್ರ, ಮೇದರಹಳ್ಳಿ, ಚಿಕ್ಕಬಣಾವಾರ, ಸಿಡೇದಹಳ್ಳಿ ಮತ್ತು ಹೆಸರಘಟ್ಟ ಮುಖ್ಯರಸ್ತೆಗಳಲ್ಲಿ ರಸ್ತೆ ದುರಸ್ತಿ ಕಾರ್ಯ ಕೈಗೊಳ್ಳಲು ಸರ್ಕಾರಕ್ಕೆ ಯಾವುದೇ ತೊಂದರೆ ಹಾಗೂ ಅಡಚಣೆಗಳು ಇರುವುದಿಲ್ಲ. ಬೆಂಗಳೂರು ನೀರು ಸರಬರಾಜು ಮತ್ತು ಒಳಚರಂಡಿ ಮಂಡಳಿಯ ಕೊಳವೆ ಜೋಡಣೆ ಕಾರ್ಯವು ಮತ್ತು ಪರೀಕ್ಷಾ ಅವಧಿ ಮುಂದುವರೆದಿರುತ್ತದೆ. ಸದರಿ ಕಾರ್ಯವು ಮುಗಿದ ನಂತರ ಶೀಘ್ರವಾಗಿ ದುರಸ್ತಿ ಕಾರ್ಯವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸಲಾಗುವುದು. |
| ಈ | ರಸ್ತೆಗಳನ್ನು ಅಭಿವೃದ್ಧಿಪಡಿಸುವ ಯೋಜನೆ ಸರ್ಕಾರ ಮುಂದಿದೆಯೇ; ಹಾಗಿದ್ದಲ್ಲಿ, ಯಾವಾಗ ರಸ್ತೆಗಳನ್ನು ಅಭಿವೃದ್ಧಿಪಡಿಸಲಾಗುವುದು?<br>(ಮಾಹಿತಿ ನೀಡುವುದು) | ಹೌದು. ಅನುದಾನದ ಲಭ್ಯತೆಯನುಸಾರ ರಸ್ತೆಗಳನ್ನು ಅಭಿವೃದ್ಧಿ ಪಡಿಸಲಾಗುತ್ತದೆ. |

**ಸಂಖ್ಯೆ: ನಅಇ 56 ಎಂಎನ್‌ವೈ 2021 (ಇ)**

(ಬಿ.ಎಸ್. ಯಡಿಯೂರಪ್ಪ)
ಮುಖ್ಯಮಂತ್ರಿ